## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 17 (27) |
| ಸದಸ್ಯರ ಹೆಸರು | | ಶ್ರೀ ಅಡಗೂರು ಹೆಚ್. ವಿಶ್ವನಾಥ್ |
| ಉತ್ತರಿಸಬೇಕಾದ ದಿನಾಂಕ | | 13-09-2021 |
| ಉತ್ತರಿಸಬೇಕಾದ ಸಚಿವರು | | ಉನ್ನತ ಶಿಕ್ಷಣ ಸಚಿವರು |
| ಪ್ರಶ್ನೆ | | ಉತ್ತರ |
| ಅ) | ಸರ್ಕಾರಿ ನೌಕರರಿಗೆ 5 ರಿಂದ 8ಕ್ಕೆ ಸ್ಥಗಿತ ವೇತನ ಬಡ್ತಿ ವಿಸ್ತರಿಸುವ ಆದೇಶವನ್ನು ಅನುದಾನಿತ ನೌಕರರಿಗೂ ಸಹ ವಿಸ್ತರಿಸಿದ್ದು, ಕಾಲೇಜು ಶಿಕ್ಷಣ ಇಲಾಖೆ ವ್ಯಾಪ್ತಿಗೆ ಬರುವ ನೌಕರರಿಗೆ ಇದುವರೆವಿಗೂ ವಿಸ್ತರಿಸದಿರಲು ಕಾರಣವೇನು; | ಸರ್ಕಾರಿ ನೌಕಕರಿಗೆ 5 ರಿಂದ 8ಕ್ಕೆ ಸ್ಥಗಿತ ವೇತನ ಬಡ್ತಿ ವಿಸ್ತರಿಸುವ ಆದೇಶವನ್ನು ಅನುದಾನಿತ ನೌಕರರಿಗೂ (ಪ್ರಾಥಮಿಕ/ಪ್ರೌಢ/ಪದವಿ ಪೂರ್ವ ಕಾಲೇಜು/ಅನುದಾನಿತ ಪಾಲಿ ಟೆಕ್ನಿಕ್/ಇಂಜಿನಿಯರಿಗ್ ಕಾಲೇಜುಗಳ ಸಿಬ್ಬಂದಿಗಳಿಗೆ) ಸಹ ವಿಸ್ತರಿಸಿದ್ದು, ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಅನುದಾನಿತ ಪದವಿ ಕಾಲೇಜುಗಳ ನೌಕರರಿಗೆ ವಿಸ್ತರಿಸಿರುವುದಿಲ್ಲ.<br><br>ಸರ್ಕಾರದ ಆದೇಶ ಸಂಖ್ಯೆ:ಎಫ್.ಡಿ/12/ ಎಸ್.ಆರ್.ಪಿ/ 2012(ಗII), ದಿನಾಂಕ:14-06-2012ರ ಸರ್ಕಾರಿ ನೌಕರರಿಗೆ ನೀಡಲಾಗುತಿದ್ದಂತಹ 05 ಸ್ಥಗಿತ ವೇತನಗಳನ್ನು ದಿನಾಂಕ:01-04-2012 ರಿಂದ ಜಾರಿಗೆ ಬರುವಂತೆ 08 ಸ್ಥಗಿತ ವೇತನ ಬಡ್ತಿಗಳಿಗೆ ಹೆಚ್ಚಿಸಲು ಸರ್ಕಾರವು ಆದೇಶಿಸಿರುತ್ತದೆ.<br><br>ಈ ಸೌಲಭ್ಯವನ್ನು ಈ ಇಲಾಖೆಯ ಅನುದಾನಿತ ಪದವಿ ಕಾಲೇಜುಗಳಲ್ಲಿ ರಾಜ್ಯ ವೇತನ ಶ್ರೇಣಿ ಪಡೆಯುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳಿಗೆ ವಿಸ್ತರಿಸಲುಆಯುಕ್ತಾಲಯದಿಂದ ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ.<br><br>ಸರ್ಕಾರದ ಪತ್ರ ಸಂಖ್ಯೆ:ಇಡಿ/172/ಯುಪಿಸಿ/ 2020(ಇ), ದಿನಾಂಕ:06-08-2021 ರಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿನ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ರಾಜ್ಯ ವೇತನ ಶ್ರೇಣಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ನೌಕರರುಗಳಿಗೆ ಸ್ಥಗಿತ ವೇತನ ಬಡ್ತಿಗಳನ್ನು 05 ರಿಂದ 08ಕ್ಕೆ ಹೆಚ್ಚಿಸಿದಲ್ಲಿ ಎಷ್ಟು ಆರ್ಥಿಕ ಹೊರೆಯಾಗುತ್ತದೆ ಎಂಬ ಬಗ್ಗೆ ಮಾಹಿತಿಯನ್ನು ಕೂಡಲೇ ಸಲ್ಲಿಸುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿರುತ್ತದೆ.<br><br>ಸದರಿ ಮಾಹಿತಿ ಸ್ವೀಕೃತಗೊಂಡ ನಂತರ ಈ ಪರಿಶೀಲಿಸಿ ಕ್ರಮವಹಿಸಲಾಗುವುದು. |

| | | |
|---|---|---|
| ಆ) | ಇದನ್ನು Retrospective (ಭವಿಷ್ಯವರ್ತಿಯಾಗಿ ಅನ್ವಯವಾಗುವಂತೆ) ಆದೇಶ ಮಾಡಲು ಸಾಧ್ಯವೇ; ಇಲ್ಲವಾದಲ್ಲಿ, (Notional pay Fixation) ಕಲ್ಪನಾತ್ಮಕ ವೇತನ ನಿಗದಿಯನ್ನಾದರೂ ಮಾಡಿ ಪಿಂಚಣಿ ಪಡೆಯಲು ಅನುಕೂಲ ಮಾಡಲಾಗುವುದೇ? | ಆಯುಕ್ತರಿಂದ ಮೇಲ್ಕಂಡ ಮಾಹಿತಿ ಸ್ವೀಕೃತಗೊಂಡ ನಂತರ ಪರಿಶೀಲಿಸಲಾಗುವುದು. |

ಇಡಿ 117 ಯುಪಿಸಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉನ್ನತ ಶಿಕ್ಷಣ ಸಚಿವರು